ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಜಪ್ತು ಮಾಡಿದ ವಾಹನ ನೀಲಿ ಬಣ್ಣದ ಲಗೇಜ್ ಆಟೋ ನಂ: ಕೆಎ–15–3936 (ಇಂಜಿನ್ ನಂ: BA-04-L-9003012, ಛಾಸ್ಸಿಸ್ ನಂಬರ್: BB-FM-207180) ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 6=0.551ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:16–01–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.145 ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–35/08–09, ದಿನಾಂಕ:6ನೇ ಫೆಬ್ರವರಿ, 2010**

**ಉಪಸ್ಥಿತರು :** ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು :** ವಲಯ ಅರಣ್ಯಾಧಿಕಾರಿ,
ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ
(ಮಾನ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** ಪತ್ತೆಯಾಗಿಲ್ಲ

**ಭಾದ್ಯತೆದಾರರು :** ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:07–12–2008 ರಂದು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯದ ತೊಗರ್ಸಿ ಶಾಖೆಯ ವನಪಾಲಕ ಮತ್ತು ಇವರ ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ತೊಗರ್ಸಿ ಗ್ರಾಮಕ್ಕೆ ಸೇರಿದ ತೊಗರ್ಸಿ ಮೀಸಲು ಅರಣ್ಯದ ಸಾಗುವಾನಿ ನೆಡುತೋಪಿನಲ್ಲಿ ತೊಗರ್ಸಿ–ಶಿರಾಳಕೊಪ್ಪಕ್ಕೆ ಹೋಗುವ ರಸ್ತೆಯ ಬಲಭಾಗದ ಡಿ ಲೈನ್ ಹತ್ತಿರ 6–00 ಗಂಟೆ ಸಮಯದಲ್ಲಿ ಒಂದು ವಾಹನಕ್ಕೆ ಸಾಗುವಾನಿ ನಾಟಾಗಳನ್ನು ತುಂಬುತ್ತಿರುವುದನ್ನು ನೋಡಿ ಇಲಾಖೆಯವರು ಅವರನ್ನು ಹಿಡಿಯಲು ಹೋದಾಗ ಇವರ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಬಿಳಿ ಬಣ್ಣದ ಮಾರುತಿ ಓಮ್ನಿ ನಂ: ಕೆಎ–04–2637 ಇಂಜಿನ್ ನಂ: F-8-BIN-967358, ಛಾಸ್ಸಿಸ್ ನಂಬರ್: ST-91-IN-914329 ಆಗಿದ್ದು, ಈ ವಾಹನದೊಳಗೆ ಚಾಲಕ ಕೂರುವ ಆಸನ ಬಿಟ್ಟು ಉಳಿದ ಜಾಗದಲ್ಲಿ ಆಸನವಿಲ್ಲದೇ ಅಲ್ಲಿ ಸಾಗುವಾನಿ 10 ತುಂಡು 0.771ಎಂ3 ಇದ್ದು, ಈ ತುಂಡುಗಳು ಹಸಿಯಾಗಿದ್ದು, ಈ ತುಂಡುಗಳ ಮೇಲೆ ಇಲಾಖಾ ಯಾವುದೇ ಛಾಪಾದ ಗುರುತಿರಲಿಲ್ಲ ಮತ್ತು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಬೀಟೆ ನಾಟಾಗಳನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 45/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ

ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ:19–12–2008ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ದಿನಾಂಕ:10–12–2008ರಂದು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಶವಂತ ಪುರ (ಉತ್ತರ) ಬೆಂಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:35/08–09 ದಿನಾಂಕ:19–12–2008ರಂದು ಪತ್ರ ಬರೆದು ಕೋರಲಾಗಿತ್ತು. ಈ ವಾಹನದ ಸಿ.ಸಿ.ಯನ್ನು ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ದಿನಾಂಕ:06–06–2000ರಲ್ಲಿ ಕಳುಹಿಸಿದ ಬಗ್ಗೆ ಸಾರಿಗೆ ಅಧಿಕಾರಿ, ಯಶವಂತಪುರ (ಉತ್ತರ), ಬೆಂಗಳೂರು ಇವರು ಪತ್ರ ಸಂಖ್ಯೆ: ಪ್ರಾಸಾಅ:ಬೆಂ(ಉ):ಸಾರಿಗೆ:2009–10 ದಿನಾಂಕ:09–11–2009ರ ಪತ್ರದಲ್ಲಿ ತಿಳಿಸಿರುತ್ತಾರೆ. ನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಬಿ3:ಅಮೊ:ವಾಹನ–35/08–09 ದಿನಾಂಕ:27–11–2009ರ ಪತ್ರದಲ್ಲಿ ಬಿ ಪ್ರತಿ ಒದಗಿಸಲು ಕೋರಲಾಯಿತು. ಅದಕ್ಕೆ ಅವರು ಈ ವಾಹನದ ಸಿಸಿಯನ್ನು ದಿನಾಂಕ:10–06–2001ರಂದು ಸಾರಿಗೆ ಕಛೇರಿ, ಸಾಗರಕ್ಕೆ ವರ್ಗಾಯಿಸಿದೆಯೆಂದು ತಿಳಿಸಿರುತ್ತಾರೆ. ಇವರ ಪತ್ರದ ಪ್ರತಿಯನ್ನು ಲಗತ್ತಿಸಿ ಬಿ3:ಅಮೊ:ವಾಹನ–35/08–09 ದಿನಾಂಕ:19–12–2009ರ ಪತ್ರದಲ್ಲಿ ಸಾರಿಗೆ ಅಧಿಕಾರಿ, ಸಾಗರ ಇವರಲ್ಲಿ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಮತ್ತು ವಾಹನದ ನೊಂದಣಿ ಮಾಲಿಕರ ಹೆಸರು ತಿಳಿಸಲು ಕೋರಿದಂತೆ ಸಾರಿಗೆ ಅಧಿಕಾರಿ, ಸಾಗರ ಇವರು ಪತ್ರ ಸಂಖ್ಯೆ: ಸಪ್ರಾಸಾಅ:ಸಾಗರ:ಆರ್‌ಜಿಎನ್:ಟಿಆರ್/09–10 ದಿನಾಂಕ:29–12–2009ರ ಪತ್ರದಲ್ಲಿ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಈ ಬಿ ಪ್ರತಿಯಲ್ಲಿ ನಮೂದಿಸಿದಂತೆ ಶ್ರೀ ಜೇಮ್ಸ್ ಲೋಪೇಸ್ ಬಿನ್ ಸಾಲ್ವೋದರ್ ಲೋಪೇಸ್, ಅಂತೋಣಿ ನಿಲಯ, 3ನೇ ತಿರುವು, ನೆಹರು ನಗರ, ಸಾಗರ ಎಂದಿದ್ದು, ಇವರಿಗೆ ದಿನಾಂಕ:02–01–2010 ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸನ್ನು ವಲಯ ಅರಣ್ಯಾಧಿಕಾರಿ, ಸಾಗರ ಇವರ ಮುಖಾಂತರ ಜಾರಿ ಮಾಡಿದ್ದು, 30 ದಿನಗಳು ಕಳೆದರೂ ಯಾರೂ ಕ್ಲೈಮ್ ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–40/08–09 ದಿನಾಂಕ:04–02–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:18–02–2009ರಂದು ಉದಯವಾಣಿ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ:19–02–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:02–01–2010 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಸಾಗುವಾನಿ ನಾಟಾ ಸಮೇತ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಸಾಗುವಾನಿ ನಾಟಾ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ಇವರು ಜಪ್ತು ಮಾಡಿದ

ವಾಹನ ಬಿಳಿ ಬಣ್ಣದ ಮಾರುತಿ ಓಮ್ನಿ ನಂ: ಕೆಎ–04–2637 (ಇಂಜಿನ್ ನಂ: F-8-BIN-967358, ಛಾಸ್ಸಿಸ್ ನಂಬರ್: ST-91-IN-914329) ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 10=0.771ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:06–02–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

ಪಿ.ಆರ್.288

## ಕರ್ನಾಟಕ ವಿಧಾನಸಭೆ

**ವಿಧಾನಸಭೆಯ ಸಚಿವಾಲಯ, ಅಂಚೆಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು–560 233**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:9ನೇ ಮಾರ್ಚ್, 2010**

**ವಿಷಯ:** ಮಾನ್ಯ ವಿರೋಧ ಪಕ್ಷದ ನಾಯಕರ ವಿಳಾಸದ ಬದಲಾವಣೆ.

ಕರ್ನಾಟಕ ವಿಧಾನಸಭೆಯ ಮಾನ್ಯ ವಿರೋಧ ಪಕ್ಷದ ನಾಯಕರಾದ **ಶ್ರೀ ಸಿದ್ದರಾಮಯ್ಯ** ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಸಿದ್ದರಾಮಯ್ಯ,
ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆ,
ನಂ.01, ಸರ್ಕಾರಿ ವಸತಿ ಗೃಹ, ಕುಮಾರಪಾರ್ಕ್ ಈಸ್ಟ್
(ಗಾಂಧಿಭವನದ ಹತ್ತಿರ), ಬೆಂಗಳೂರು–560 001.

ಆದಕಾರಣ, ಮಾನ್ಯ ವಿರೋಧ ಪಕ್ಷದ ನಾಯಕರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

ಪಿ.ಆರ್.389

## ಕರ್ನಾಟಕ ವಿಧಾನಸಭೆ

**ವಿಧಾನಸಭೆಯ ಸಚಿವಾಲಯ, ಅಂಚೆಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು–560 233**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:8ನೇ ಮಾರ್ಚ್, 2010**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಶಿವಮೊಗ್ಗ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ **ಶ್ರೀ ಕೆ.ಎಸ್. ಈಶ್ವರಪ್ಪ** ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಕೆ.ಎಸ್. ಈಶ್ವರಪ್ಪ,
ವಿಧಾನಸಭಾ ಸದಸ್ಯರು,
ನಂ.41, 3ನೇ ಕ್ರಾಸ್, 2ನೇ ಮುಖ್ಯರಸ್ತೆ,
ಚಕ್ರವರ್ತಿ ಬಡಾವಣೆ, ಬೆಂಗಳೂರು–560 001.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

ಪಿ.ಆರ್.390

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**
**ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ,**
**ಕವಿಪ್ರನಿನಿ., ಕಾವೂರು, ಮಂಗಳೂರು**

**ಸಂಖ್ಯೆ:ಕಾನಿಇಂ/ಬೃಕಾವಿ/ಮಂ/ಸಕಾನಿಇಂ(ಕ)/6567–71, ದಿನಾಂಕ:8ನೇ ಮಾರ್ಚ್, 2010**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, ವಿದ್ಯುತ್ ಸರಬರಾಜು ಕಾಯ್ದೆ 2003, ಸೆಕ್ಷನ್ 67 ಅಡಿಯಲ್ಲಿ ಒಂದು ಯೋಜನೆಯನ್ನು ರೂಪಿಸಿರುತ್ತದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2) (ಸಿ) ಅನ್ವಯ ಲೈಸೆನ್ಸ್‌ದಾರರಿಗೆ/ ಯೋಜನೆಯ ಸಂಬಂಧಿತರಿಗೆ, ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಯೋಜನೆಯ ವಿವರಗಳು ಈ ಕೆಳಕಂಡಂತಿವೆ:

1. **ಯೋಜನೆಯ ಹೆಸರು:** ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕಿನ ಕೆಯ್ಯೂರು ಗ್ರಾಮದ ಮಾಡಾವುನಲ್ಲಿ ಸ್ಥಾಪಿಸಲು ಉದ್ದೇಶಿಸಿರುವ 110/33/11 ಕೆವಿ ವಿದ್ಯುತ್ ಉಪಕೇಂದ್ರಕ್ಕೆ ಪ್ರಸ್ತಾವಿತ 110 ಕೆವಿ ಏಕ ವಿದ್ಯುತ್ ಪ್ರಸರಣಾ ಮಾರ್ಗವನ್ನು ದ್ವಿಪ್ರಸರಣಾ ವಿದ್ಯುತ್ ಗೋಪುರದಲ್ಲಿ ಹಾಲಿ ಇರುವ 110 ಕೆವಿ ನೆಟ್ಲಮುಡ್ನೂರ್–ಕಬಕ ಲೈನಿನ ಕಬಕ ರೈಲ್ವೆ ಕ್ರಾಸಿಂಗ್ ಬಳಿ ಇರುವ ಬಹುಮಂಡಲ ಗೋಪುರ ಸಂಖ್ಯೆ:28 ರಿಂದ 27.0 ಕಿ.ಮೀ. ಉದ್ದದ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ.
2. **ಪ್ರಮುಖ ಲಕ್ಷಣಗಳು:** ಸಾಂಪ್ರದಾಯಿಕವಾದ ಜಿ.ಐ. ಲ್ಯಾಟೀಸ್ ಮಾದರಿಯ ದ್ವಿ ಪ್ರಸರಣಾ ಗೋಪುರಗಳ ಮೇಲೆ ಲಿಂಕ್ಸ್ ಎ.ಸಿ.ಎಸ್.ಆರ್. ವಾಹಕವನ್ನು ಉಪಯೋಗಿಸಿ, ಸುಮಾರು 27.0 ಕಿ.ಮೀ. ಉದ್ದದ ಪ್ರಸ್ತಾವಿತ 110 ಕೆವಿ ಏಕ ವಿದ್ಯುತ್ ಪ್ರಸರಣಾ ಮಾರ್ಗದ ನಿರ್ಮಾಣ.
3. **ಹಾದು ಹೋಗುವ ಪ್ರದೇಶಗಳು:** ಪುತ್ತೂರು ತಾಲ್ಲೂಕಿನ ಸುತ್ತಮುತ್ತಲಿನ ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಹಾಗೂ ನಿರಂತರ ವಿದ್ಯುತ್ ಸರಬರಾಜು ಮತ್ತು ಸುತ್ತಮುತ್ತಲಿನಲ್ಲಿ ಬೆಳೆಯುತ್ತಿರುವ ವಿದ್ಯುತ್ ಬೇಡಿಕೆಯನ್ನು ಪೂರೈಸುವ ಸಲುವಾಗಿ ಕೈಗೊಳ್ಳಲಾದ ಈ ಪ್ರಸ್ತಾವಿತ ವಿದ್ಯುತ್ ಮಾರ್ಗವು 22 ಮೀಟರ್ ಕಾರಿಡಾರ್ ಅಗಲವನ್ನು ಹೊಂದಿದ್ದು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಈ ಕೆಳಗಿನ ಪ್ರದೇಶಗಳಲ್ಲಿ ಹಾದುಹೋಗುತ್ತದೆ. ಕಬಕ, ಕಬಕ ರೈಲ್ವೆ ಕ್ರಾಸಿಂಗ್ ಮಿತಿಯಿಂದ ಪುತ್ತೂರು–ಮಂಗಳೂರು ರಾಜ್ಯ ಹೆದ್ದಾರಿ ಕ್ರಾಸಿಂಗ್, ಕೋಡಿಪಾಡಿ, ಕೋಡಿಪಾಡಿ ರಕ್ಷಿತಾರಣ್ಯ ಮೂಲಕ, ಉಜ್ರೆಪಾದೆ, ಬಲ್ನಾಡ್, ವಿಟ್ಲ–ಪುತ್ತೂರು ರಸ್ತೆ ಕ್ರಾಸಿಂಗ್, ವಿನಾಯಕನಗರ, ಮಚ್ಚಿಮಲೆ, ಮಚ್ಚಿಮಲೆ ರಕ್ಷಿತಾರಣ್ಯ ಮೂಲಕ, ಕುಂಜುರುಪಂಜ, ಬಲ್ಲೇರಿ, ಬಲ್ಲೇರಿ, ರಕ್ಷಿತಾರಣ್ಯ ಮೂಲಕ, ಕುನಿಜಾಲು, ಮರಿಕೆ ಸರಹದ್ದು, ಕೈಕಾರ, ಕುಂತಿನುಪಿನಡ್ಕ, ಮುರುವ, ಉಜಿರೋಡಿ, ಶೇಖ್‌ಮಲ್ಯೆ, ಅರಿಯಡ್ಕ, ಪುತ್ತೂರು–ಸುಳ್ಯ ರಾಜ್ಯ ಹೆದ್ದಾರಿ ಕ್ರಾಸಿಂಗ್, ದೇರ್ಲ, ಪಲ್ಲುನಿ, ಯೆಟ್ಟಿಡ್ಕ, ಕೈಕಂಬ, ಬಲ್ಲಾಜ, ಕೆಯ್ಯೂರು, ಮಾಡಾವುಕಟ್ಟೆ, ಮಾಡಾವುಕಟ್ಟೆ ಶಾಲೆಯ ಸರಹದ್ದು, ಪುತ್ತೂರು–ಬೆಳ್ಳಾರೆ ರಸ್ತೆ ಕ್ರಾಸಿಂಗ್, ಅಂಕತಡ್ಕ, ಮಾಡಾವು, ಕಂಚಿನಡ್ಕ ಗ್ರಾಮ ಸರಹದ್ದು ಮೂಲಕ ಹಾದು ಪ್ರಸ್ತಾವಿತ ಮಾಡಾವು ವಿದ್ಯುತ್ ಉಪಕೇಂದ್ರವನ್ನು ತಲುಪುವುದು ಆಗಿರುತ್ತದೆ.
4. **ಪ್ರಸರಣ ಮಾರ್ಗದ ಮತ್ತು ವಿದ್ಯುತ್ ಕೇಂದ್ರದ ಅಂದಾಜು ಮೌಲ್ಯ :** ಸಾಮಗ್ರಿ ಮತ್ತು ಲೇಬರ್ ವೆಚ್ಚ ಸೇರಿಸಿ ಅಂದಾಜು 2414.34 ಲಕ್ಷ ರೂಪಾಯಿಗಳು.

ಮೇಲೆ ತಿಳಿಸಿರುವ ಯೋಜನೆಯನ್ನು ಕಾರ್ಯಗತಗೊಳಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು, ಭಾರತೀಯ ಟೆಲಿಗ್ರಾಫಿಕ್ ಕಾಯಿದೆ 1885 (13) ಅಧಿನಿಯಮ ಭಾಗ–IIIರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸಿರುತ್ತದೆ. ಮೇಲಿನ ಪ್ರಸ್ತಾವಿತ ಯೋಜನೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ನಿಗಮದ ಪರಿಗಣನೆಗಾಗಿ/ ಅವುಗಳ ನಿವಾರಣೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ ಎರಡು ತಿಂಗಳೊಳಗಾಗಿ ಈ ಕೆಳಗಿನ ಕಛೇರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ್ (ವಿದ್ಯುತ್),
ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ.,
ಕಾವೂರು, ಮಂಗಳೂರು–15.

ಪಿ.ಡಿ.55

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕೃಮಾಇ:18:ಚುನಾವಣೆ:2008, ಬೆಂಗಳೂರು, ದಿನಾಂಕ:1ನೇ ಫೆಬ್ರವರಿ/ಮಾರ್ಚ್, 2010**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಜಿ. ರಾಮಚಂದ್ರ ಆದ ನಾನು, ಚಿಕ್ಕಮಗಳೂರು ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1. | ಚಿಕ್ಕಮಗಳೂರು | ಶ್ರೀ ಯೋಗೇಂದ್ರಕುಮಾರ ನಾಯ್ಕ,<br>ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ತರೀಕೆರೆ. |

**ಜಿ. ರಾಮಚಂದ್ರ**
ನಿರ್ದೇಶಕರು.

ಪಿ.ಆರ್.388

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ

### ಅಧಿಸೂಚನೆ

**ಸಂಖ್ಯೆ: ಬಿ3:ಅಮೊ.ವಾಹನ.44/09–10, ದಿನಾಂಕ:8ನೇ ಮಾರ್ಚ್, 2010**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡ ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ಟ್ರ್ಯಾಕ್ಟರ್ ಸಿಟಿಡಿ–2478 ಎಂವೈಯು–4488 | ಆನವಟ್ಟಿ ವಲಯದ ಅ.ಮೊ.ಸಂಖ್ಯೆ:51/09–10, ದಿನಾಂಕ:30.07.2009. | 20-PN-310101 | Not Visible |
| 2. | ಮಾರುತಿ ವ್ಯಾನ್ ಕೆಎ–01–ಪಿ–5715 | ಸಾಗರ ವಲಯದ ಅ.ಮೊ.ಸಂಖ್ಯೆ:94/09–10, ದಿನಾಂಕ:04.12.2009 | Not Visible | ST-91-166151 |
| 3. | ಮಾರುತಿ ವ್ಯಾನ್ ಜಿಎ–01–ಜೆ–1073 | ಅಂಬ್ಲಿಗೊಳ ವಲಯದ ಅ.ಮೊ.ಸಂಖ್ಯೆ:114/09–10 ದಿನಾಂಕ:04.01.2010 | Not Visible | Not Visible |
| 4. | ಟ್ರ್ಯಾಕ್ಟರ್ ಕೆಎ–15–4347, 4348 | ಆನವಟ್ಟಿ ವಲಯದ ಅ.ಮೊ. ಸಂಖ್ಯೆ:128/09–10 ದಿನಾಂಕ:09.02.2010 | R-181-72-610119 | Not Visible |
| 5. | ಟಿವಿಎಸ್ ಮ್ಯಾಕ್ಸ್–100 ಸಿಎನ್ಇ–6777 | ಆನವಟ್ಟಿ ವಲಯದ ಅ.ಮೊ.ಸಂಖ್ಯೆ:121/09–10 ದಿನಾಂಕ:28.01.2010 | Not Visible | Not Visible |
| 6. | ಮಾರುತಿ ವ್ಯಾನ್ ಕೆಎ–22–ಎಂ–514 | ಅರಣ್ಯ ಸಂಚಾರಿದಳ, ಶಿಕಾರಿಪುರ ಅ.ಮೊ.ಸಂಖ್ಯೆ:93/09–10, ದಿನಾಂಕ:23.02.2010. | Not Visible | ST-91-IN-848-793 |
| 7. | ಮಾರುತಿ ವ್ಯಾನ್ ಕೆಎ–19–ಎಂ–85 | ಸಾಗರ ವಲಯದ ಅ.ಮೊ.ಸಂಖ್ಯೆ:127/09–10 ದಿನಾಂಕ:07.03.2010 | | |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ

ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣೆ ಮಾಡಲು ಉಪಯೋಗಿಸಿದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮಹೇಶ್ ಬಿ. ಶಿರೂರ್**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.387

**OFFICE OF THE DEPUTY COMMISSIONER, BELGAUM**

**NOTIFICATION**

**No.RB/CNS/CR-5/2009-10, Dated:2nd March, 2010**

In exercise of the powers delegated by Government in their Notification No.RD.20 ETC 2009, Dated:02.12.2009 issued under Sub-Section (4) of Section 4 of the India Census Act 1948 (Central Act No.37 of 1948) the undersigned hereby appoints the officers noted in Col.3 as Census officers with Designations noted in Col.4 for jurisdiction noted in Col.5 of the table given below for the purpose of 2011 Census.

| Sl. No. | Administrative Unit | Designation | To be appointed as | Jurisdiction |
|---|---|---|---|---|
| 1. | Belgaum Education District | Deputy Director of Public Instructions Belgaum | Assistant District Census Officer Belgaum | Entire Belgaum Education District. He will work in co-ordination with District Census Officer under the control of Principal Census Officer. |
| 2. | Chikkodi Education District | Deputy Director of Public Instructions Chikkodi | Assistant District Census Officer Chikkodi | Entire Chikkodi Education District. He will work in co-ordination with District Census Officer under the control of Principal Census Officer. |

**Dr. J. RAVISHANKAR**
Principal Census Officer and
Deputy Commissioner
Belgaum District, Belgaum.

PR-391

**INDIAN RAILWAYS**

**RAILWAY ELECTRIFICATION**

**Proforma 10-01**

**PUBLIC NOTIFICATION**

Notice is hereby given to all users of Railway lines and premises situated on the completed section of the under noted section of the South Central Railway and Central Railway that the 25000 Volts, 50Hz, A.C. Overhead traction wires will be energized on or after the date specified against the section. On and from the same date the Over head traction line shall be treated as **LIVE** at all times and no unauthorized person shall approach or work in the proximity of the said Over head line.

| Section | Location from | Location to | Date | Zone |
|---|---|---|---|---|
| Kurkunta (Incl,) - Wadi (Incl. and all sidings in the section (Both UP and DOWN lines). | KM 49/9 & 10 | KM 0.00 | 18.12.2008 | South Central Railway Secunderabad. |
| | KM 601 | KM 608 (Including KM 0.00) | 18.12.2008 | Central Railway, Mumbai |

Sd/-
Chief Project Manager
Railway Electrification,
SECUNDERABAD.

**ಭಾರತೀಯ ರೈಲ್ವೆ**

**ರೈಲ್ವೆ ವಿದ್ಯುದೀಕರಣ**

**ಪ್ರಪತ್ರ–10–01**

**ಸಾರ್ವಜನಿಕ ಸೂಚನೆ**

ಕೆಳಗೆ ತಿಳಿಸಲಾಗಿರುವ ದಕ್ಷಿಣ ಮಧ್ಯ ರೈಲ್ವೆ ಮತ್ತು ಮಧ್ಯ ರೈಲ್ವೆಯ ವಿಭಾಗಗಳಲ್ಲಿ ವಿಭಾಗಗಳ ಮುಂದೆ ತಿಳಿಸಿರುವ ದಿನಾಂಕಗಳಂದು ಅಥವಾ ನಂತರ 25,000 ವೋಲ್ಟ್ 50Hz, A.C. ಜವರ್ ಹೆಡ್ ಲೈನ್‌ಗಳನ್ನು ಎನರ್ಜೈಸ್ ಮಾಡಲಾಗುವುದು ಎಂದು ಈ ಮೂಲಕ ರೈಲ್ವೆ ಲೈನುಗಳ ಮತ್ತು ರೈಲ್ವೆ ಆವರಣದ ಎಲ್ಲ ಬಳಕೆದಾರರಿಗೆ ಸೂಚನೆ ನೀಡಲಾಗಿದೆ. ಆ ದಿನಾಂಕದಿಂದ ಮತ್ತು ಮುಂದೆ ಓವರ್ ಹೆಡ್ ಟ್ರ್ಯಾಕ್ಷನ್ ಲೈನುಗಳು ಎಲ್ಲ ಕಾಲದಲ್ಲೂ ಸಜೀವವಾಗಿರುತ್ತವೆ ಎಂದು ತಿಳಿಯುವುದು ಮತ್ತು ಯಾವುದೇ ವ್ಯಕ್ತಿ ಅನಧಿಕೃತವಾಗಿ ಇಲ್ಲಿ ತಿಳಿಸಿರುವ ಓವರ್ ಹೆಡ್ ಲೈನ್ ಸಮೀಪ ಹೋಗಬಾರದು ಮತ್ತು ಲೈನ್ ಹತ್ತಿರದಲ್ಲಿ ಯಾವುದೇ ಕೆಲಸ ಮಾಡಬಾರದು.

| ವಿಭಾಗ | ಸ್ಥಳದಿಂದ | ಸ್ಥಳದವರೆಗೆ | ದಿನಾಂಕ | ಜೋನ್ |
|---|---|---|---|---|
| ಕುರ್ಕುಂಟ (ಸೇರಿ)–ವಾಡಿ (ಸೇರಿ) ಮತ್ತು ವಿಭಾಗದಲ್ಲಿರುವ ಎಲ್ಲ ಸೈಡಿಂಗುಗಳು (ಎರಡೂ ಅಪ್ ಮತ್ತು ಡೌನ್ ಲೈನ್‌ಗಳು) | KM 49/9 ಮತ್ತು 10 | KM 0.00 | 18.12.2008 | ದಕ್ಷಿಣ ಮಧ್ಯ ರೈಲ್ವೆ ಸಿಕಂದರಾಬಾದ್ |
| | KM 601 | KM 608 (KM 0.00 ಸೇರಿ) | 18.12.2008 | ಮಧ್ಯ ರೈಲ್ವೆ ಮುಂಬೈ |

ಸಹಿ/–
ಮುಖ್ಯ ಯೋಜನಾ ವ್ಯವಸ್ಥಾಪಕರು
ರೈಲ್ವೆ ವಿದ್ಯುದೀಕರಣ,
ಸಿಕಂದರಾಬಾದ್.

**INDIAN RAILWAYS**
**RAILWAY ELECTRIFICATION**
**INTRUODUCTION OF AC 25KV TRACTION**
**Proforma 10-02**
**"WARNING" TO ROAD USERS**

It is notified for information of the public that in connection with introduction of 25 KV AC Electric Traction over the section Kurkunta (Incl.)- Wadi (Incl.) of the South Central Railway and Central Railway, height gauges have been erected at the level crossings with clear height 4.67 Meters above road level with a view to prevent loads of excessive height from coming into contact or dangerous proximity to "LIVE" traction wire.

| Section | Date | Zone |
|---|---|---|
| Kurkunta (Incl.)- Wadi (Incl. and all sidings in the section (Both UP and DOWN Lines). | 18.12.2008 | South Central Railway Secunderabad and Central Railway, Mumbai |

Public are hereby notified to observe the height specified above for the purpose of loading vehicles and to see that the loads carried in Road vehicles do not infringe the height gauges under any circumstances.

The dangers of a load of excessive height as following:

1. Danger to the height gauge and consequent obstruction to the road as well as the Railway line.
2. Danger to the mererial or equipment carried or the vehicle itself.
3. Danger to fire and risk of life due to contact with or dangerous proximity to the Conductors.

Sd/-
Chief Project Manager
Railway Electrification,
SECUNDERABAD.

**ಭಾರತೀಯ ರೈಲ್ವೆ**
**ರೈಲ್ವೆ ವಿದ್ಯುದೀಕರಣ**
**AC 25 KV ಟ್ರ್ಯಾಕ್ಷನ್ ಪ್ರಾರಂಭ**
**ಪ್ರಪತ್ರ 10–02**
**ರಸ್ತೆ ಬಳಕೆದಾರರಿಗೆ ಎಚ್ಚರಿಕೆ**

ದಕ್ಷಿಣ ಮಧ್ಯ ರೈಲ್ವೆ ಮಧ್ಯ ರೈಲ್ವೆಯ ಕುರ್ಕುಂಟಾ (ಸೇರಿ)– ವಾಡಿ (ಸೇರಿ) ವಿಭಾಗದಲ್ಲಿ 25 KV AC ವಿದ್ಯುತ್ ಟ್ರ್ಯಾಕ್ಷನ್ ಪ್ರಾರಂಭಿಸುವ ಸಂಬಂಧವಾಗಿ ಮಿತಿ ಮೀರಿದ ಎತ್ತರವಾದ ಲೋಡುಗಳು ಜೀವಂತ ಟ್ರ್ಯಾಕ್ಷನ್ ವೈರ್‌ಗಳಿಗೆ ಅಪಾಯಕರ ಅಂತರದಲ್ಲಿ ಸಮೀಪಿಸದಂತೆ ಅಥವಾ ಲೆವೆಲ್ ಕ್ರಾಸಿಂಗ್‌ಗಳಲ್ಲಿ ರಸ್ತೆ ಮಟ್ಟದಿಂದ 4.67 ಮೀ. ನಿರ್ದಿಷ್ಟ ಎತ್ತರದಲ್ಲಿ ಹೈಟ್ ಗೇಜ್‌ಗಳನ್ನು ಅಳವಡಿಸಲಾಗಿದೆ ಎಂದು ಸಾರ್ವಜನಿಕ ತಿಳುವಳಿಕೆಗಾಗಿ ಈ ಸೂಚನೆ ನೀಡಲಾಗಿದೆ.

| ವಿಭಾಗ | ದಿನಾಂಕ | ಜೋನ್ |
|---|---|---|
| ಕುರ್ಕುಂಟ (ಸೇರಿ)–ವಾಡಿ (ಸೇರಿ) ಮತ್ತು ವಿಭಾಗದಲ್ಲಿರುವ ಎಲ್ಲ ಸೈಡಿಂಗುಗಳು (ಎರಡೂ ಅಪ್ ಮತ್ತು ಡೌನ್ ಲೈನ್‌ಗಳು) | 18.12.2008 | ದಕ್ಷಿಣ ಮಧ್ಯ ರೈಲ್ವೆ ಸಿಕಂದರಾಬಾದ್ ಮತ್ತು ಮಧ್ಯ ರೈಲ್ವೆ ಮುಂಬೈ |

ವಾಹನಗಳಿಗೆ ಲೋಡ್ ತುಂಬಿಸುವಾಗ ಮತ್ತು ಸಾಗಿಸುವಾಗ ಮೇಲೆ ತಿಳಿಸುವ ಎತ್ತರವನ್ನು ಪಾಲಿಸಬೇಕು ಮತ್ತು ಯಾವುದೇ ಸಂದರ್ಭದಲ್ಲು ಹೈಟ್ ಗೇಜನ್ನು ಅತಿಕ್ರಮಿಸಬಾರದು ಎಂದು ಸಾರ್ವಜನಿಕರಿಗೆ ಈ ಮೂಲಕ ಸೂಚನೆ ನೀಡಲಾಗಿದೆ.

ಮಿತಿ ಮೀರಿದ ಎತ್ತರವಾದ ಲೋಡ್‌ನಿಂದ ಉಂಟಾಗುವ ಅಪಾಯಗಳು ಕೆಳಕಂಡಂತಿದೆ.

1. ಹೈಟ್‌ಗೇಜ್‌ಗೆ ಧಕ್ಕೆ ಮತ್ತು ತತ್ಕಾರಣ ರಸ್ತೆ ಮತ್ತು ರೈಲ್ವೆ ಲೈನ್‌ಗಳಿಗೆ ಅಡಚಣೆ.
2. ವಾಹನದಲ್ಲಿ ಸಾಗಿಸುವ ಪದಾರ್ಥ ಅಥವಾ ಉಪಕರಣ ಅಥವಾ ವಾಹನಕ್ಕೆ ಅಪಾಯ.
3. ವಾಹಾಕಗಳ ಅಪಾಯಕರ ಸಾಮೀಪ್ಯ ಅಥವಾ ಸಂಪರ್ಕದಿಂದ ಬೆಂಕಿ ಅಪಘಾತ ಅಥವಾ ಪ್ರಾಣಾಪಾಯ.

ಸಹಿ/–
ಮುಖ್ಯ ಯೋಜನಾ ವ್ಯವಸ್ಥಾಪಕರು
ರೈಲ್ವೆ ವಿದ್ಯುದೀಕರಣ,
ಸಿಕಂದರಾಬಾದ್.

ಪಿ.ಡಿ.–54

**BYAPPANHALLI POLICE STATION, BANGALORE CITY**

**No.T2/PS/CC/91/2010, Dated: 11th March, 2010**

**ವಿಷಯ:** ಬೈಯಪ್ಪನಹಳ್ಳಿ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ವಾಹನಗಳು ಹಾಗೂ ಇತರೆ ವಸ್ತುಗಳ ವಿವರಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲು ಕೋರುವ ಬಗ್ಗೆ.

**ಉಲ್ಲೇಖ:** ಮಾನ್ಯ 10ನೇ ಎ.ಸಿ.ಎಂ.ಎಂ. ನ್ಯಾಯಾಲಯದ ಆದೇಶ ದಿನಾಂಕ:10.03.2010.

ಮೇಲ್ಕಂಡ ವಿಷಯ ಹಾಗೂ ಉಲ್ಲೇಖನಕ್ಕೆ ಸಂಬಂಧಿಸಿದಂತೆ ತಮ್ಮಲ್ಲಿ ಕೋರಿಕೊಳ್ಳುವುದೇನೆಂದರೆ, ಬೈಯಪ್ಪನಹಳ್ಳಿ ಪೊಲೀಸ್ ಠಾಣೆಯಲ್ಲಿ 2008 ಮತ್ತು 2009ನೇ ಸಾಲಿನಲ್ಲಿ ಅಮಾನತ್ತುಪಡಿಸಿಕೊಂಡಿರುವ ವಾರಸುದಾರರಿಲ್ಲದ ವಾಹನ ಹಾಗೂ ಇತರೆ ವಸ್ತುಗಳ ವಿವರಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲು ಉಲ್ಲೇಖ 1 ರಲ್ಲಿ ಮಾನ್ಯ 10ನೇ ಎ.ಸಿ.ಎಂ.ಎಂ. ನ್ಯಾಯಾಲಯದ ನ್ಯಾಯಾಧೀಶರವರ ಅನುಮತಿ ಪಡೆದುಕೊಂಡಿದ್ದು ಪ್ರತಿಯನ್ನು ಇದರೊಂದಿಗೆ ಲಗತ್ತಿಸಿರುತ್ತದೆ. ಆದುದರಿಂದ ದಯಮಾಡಿ ಈ ಕೆಳಕಂಡ ವಾಹನ ಮತ್ತು ಇತರೆ ವಸ್ತುಗಳ ವಿವರಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಕೋರುತ್ತೇನೆ.

**UNCLAIMED PROPERTY SEIZED AT BYAPPANHALLI POLICE STATION FOR THE YEAR 2008-09**

| Sl. No. | Cr.No. & Sec. of Law | Vehicle Name & Reg. No. Colour | Chassis No. | Engine No. | P.F. No. |
|---|---|---|---|---|---|
| 1. | 213/2008 u/s 379 IPC | Suzuki Shogun KA-05-V-4760 Sliver colour | F 754301 | - | 95/08 |
| 2. | 279/08 u/s 399 402 IPC | Bajaj Pulsar KA-03-ES-1610 Black | DSVBMA13341 | D4GBMA1261 | 100/08 |
| 3. | -Do- | TVS Fiero FX KA-04-EH-1667 Dark green | OEIC42061178 | MD624FE1342 CO1947 | -do- |
| 4. | 196/08 u/s 454 457 380 IPC | Yamaha RX-100 KA-36 E-6782 Green | 1L1-423445 | 1L1-423445 | 107/08 |
| 5. | -do- | Kinitic Honda No.KA-05-EC-6115 | ESCC57570 | SCO 57759 | -do- |
| 6. | -do- | Bajaj Safire No. KA-03-ED-6000 Blue colour | CFLBGL17005 | CFGBGL17054 | -do- |
| 7. | -do- | 19,500/-cash | - | - | 109/08 |
| 8. | -do- | 12 Cutting mission | - | - | 108/08 |
| 9. | -do- | 15 Drilling mission | - | - | -do- |
| 10. | -do- | 7 polish mission | - | - | -do- |

| Sl. No. | Cr.No. & Sec. of Law | Vehicle Name & Reg. No. Colour | Chassis No. | Engine No. | P.F. No. |
|---|---|---|---|---|---|
| 11. | -do- | 9 Grinding mission | - | - | -do- |
| 12. | -do- | Other 2 cutting mission | - | - | -do- |
| 13. | 302/08 u/s 41cl(D) R/w 102 Cr.P.C. R/w 379 IPC | 1 Welding gas cylinder | | | 116/08 |
| 14. | -do- | 4 Welding gas cylinder | | | -do- |
| 15. | 303/08 41 cl (D) R/w 102 Cr.P.C. R/w 379 IPC | Yamaha RX-100 KA-03-EA-6688 Blue colour | 1L1090747 | 1L1090747 | 117/08 |
| 16. | -do- | One Nokia Mobile phone | - | - | -do- |
| 17. | 249/08 u/s 454 457 380 IPC | Yamaha RX-100 CKN-3140 Black colour | 1L1-082086 | 1L1-082086 | 13/09 |
| 18. | 64/09 u/s 399 402 IPC | Kinetic Nova KA-05-EJ-3733 Black Colour | EUBOO1196 | - | 36/09 |
| 19. | -do- | Bajaj KB-100 KA-05 L448 Black Colour | 30M93HO1626 | 30F93JO2776 | -do- |
| 20. | 50/09 u/s 457 380 IPC | 2 Nokia Mobiles | - | - | 43/09 |
| 21. | -do- | 1 Video Con T.V. | - | - | -do- |
| 22. | -do- | 1 Classic T.V. | - | - | -do- |
| 23. | -do- | 1 Philips T.V. | - | - | -do- |
| 24. | -do- | 1 HP Laptop | - | - | 44/09 |

ಪೊಲೀಸ್ ಇನ್ಸ್‌ಪೆಕ್ಟರ್,
ಬೈಯಪ್ಪನಹಳ್ಳಿ ಪೊಲೀಸ್ ಠಾಣೆ,
ಬೆಂಗಳೂರು ನಗರ.

ಪಿಆರ್–384

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ/ಕಾನಪ/ಎಫ್–07/2010/817, ದಿನಾಂಕ:5ನೇ ಮಾರ್ಚ್, 2010**

**ಅರ್ಜಿದಾರರು:**

1) ಶ್ರೀ ತೀಲಕರೆಡ್ಡಿ ಶಂಕರಪ್ಪಾ ಬಿಡರಹಳ್ಳಿ
2) ಶ್ರೀಮತಿ ಲಲಿತಾ ತೀಲಕರೆಡ್ಡಿ
3) ಕವಿತಾ ತೀಲಕರೆಡ್ಡಿ, ಬಿಡರಹಳ್ಳಿ
4) ಸವಿತಾ ತೀಲಕರೆಡ್ಡಿ ಬಿಡರಹಳ್ಳಿ
R/o ಹರ್ಲಾಪುರ ತಾ:ಜಿ:ಗದಗ.

**ಪ್ರತಿವಾದಿಗಳು:**

1) ಸರ್ಪರಾಜ ಇಬ್ರಾಹಿಂಸಾಬ ಬಾರುದವಾಲೆ R/o ಕಶ್ಮರಿ ಟ್ರಾನ್ಸ್‌ಪೋರ್ಟ್, ಬೈಪಾಸ್ ಬ್ರಿಡ್ಜ್ ಹತ್ತಿರ, ಕಾರವಾರ ರೋಡ್, ಹುಬ್ಬಳ್ಳಿ.
2) ರೀಲಾಯನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., ವಿ.ಎ ಕಲಬುರ್ಗಿ ಸ್ಕ್ವೇರ್, ದೇಶಾಪಾಂಡೆ ನಗರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ (1) ಶ್ರೀ ತೀಲಕರೆಡ್ಡಿ ಶಂಕರಪ್ಪಾ ಬಿಡರಳ್ಳಿ (2) ಶ್ರೀಮತಿ ಲಲಿತಾ ತೀಲಕರೆಡ್ಡಿ (3) ಕವಿತಾ ತೀಲಕರೆಡ್ಡಿ ಬಿಡರಳ್ಳಿ (4) ಸವಿತಾ ತೀಲಕರೆಡ್ಡಿ ಬಿಡರಳ್ಳಿ R/o ಹರ್ಲಾಪುರ ತಾ:ಜಿ:ಗದಗ, ಇವರು ತಾವು ಮೃತ ಮಂಜುನಾಥರೆಡ್ಡಿ ಇವರ ತಂದೆ, ತಾಯಿ ಮತ್ತು ಸಹೋದರಿಯರು ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜುನಾಥರೆಡ್ಡಿ ಇವರು ಒಂದನೇ ಪ್ರತಿವಾದಿಗಳಾದ ಸರ್ಪರಾಜ ಇಬ್ರಾಹಿಂಸಾಬ ಬಾರುದವಾಲೆ, ಹುಬ್ಬಳ್ಳಿ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿಆರ್–376

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ/ಕಾನಪ/ಎಫ್–17/2010/837, ದಿನಾಂಕ:5ನೇ ಮಾರ್ಚ್, 2010**

**ಅರ್ಜಿದಾರರು:**

1) ಶ್ರೀಮತಿ ಹುಲಿಗೆವ್ವ W/o ಹನುಮಪ್ಪ ಉಪ್ಪಾರ
2) ಸೌಮ್ಯ D/o ಹನುಮಪ್ಪ ಉಪ್ಪಾರ
R/o ಪೇತಾಲೂರು, ತಾ: ಮುಂಡರಗಿ, ಜಿ:ಗದಗ.

**ಪ್ರತಿವಾದಿಗಳು:**

1) ಚನ್ನಪ್ಪ ಭೀಮಪ್ಪ ಸೂಡಿ R/o ಪೇತಾಲೂರು ತಾ: ಮುಂಡರಗಿ, ಜಿ:ಗದಗ.
2) ದಿ ಡಿವ್ಹಿಜನಲ್ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್ ಸುಜಾತಾ ಕಾಂಪ್ಲೆಕ್ಸ್, ಪಿ.ಬಿ.ರೋಡ್, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ (1) ಶ್ರೀಮತಿ ಹುಲಿಗೆವ್ವ ಹನುಮಪ್ಪ ಉಪ್ಪಾರ (2) ಸೌಮ್ಯ ಹನುಮಪ್ಪ ಉಪ್ಪಾರ R/o ಪೇತಾಲೂರು ತಾ: ಮುಂಡರಗಿ ಜಿ:ಗದಗ, ಇವರು ತಾವು ಮೃತ ಹನುಮಪ್ಪ ಯಲ್ಲಪ್ಪ ಉಪ್ಪಾರ ಇವರ ಹೆಂಡತಿ ಮತ್ತು ಮಗಳು ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಪ್ಪ ಯಲ್ಲಪ್ಪ ಉಪ್ಪಾರ ಇವರು ಒಂದನೇ ಪ್ರತಿವಾದಿಗಳಾದ ಚನ್ನಪ್ಪ ಭೀಮಪ್ಪ ಸೂಡಿ R/o ಪೇತಾಲೂರ ತಾ: ಮುಂಡರಗಿ ಜಿ:ಗದಗ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ

ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ
ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾನೂನು ಅಡಿ ಆಯುಕ್ತರು.

ಪಿಆರ್–377

**OFFICE OF THE COMMANDANT, II BN, K.S.R.P. , V.T.U. CAMPUS,**

**POST MACHE, BELGAUM.**

**RIGHT TO INFORMATION ACT 2005**

**POLICE DEPARTMENT MANUAL**

**(RIGHT TO INFORMATION ACT-2005 SECTION 4)**

**[1] THE PARTICULARS OF ITS ORGANISATION, FUNCTIONS, DUTIES**

**ORGANISATION;**

The Commandant is the head of the K.S.R.P. IInd Battalion, 3 Assistant Commandants are assisting the activities of the Battalion The Administration of the Battalion is classified into two groups One group is called administration group which is responsible for the smooth administration of the force and another group is called Head quarters group. The special R.P.Is who are subordinate to the Assistant commandants performing the duties of deployment parade physical training and maintenance of the Arms and ammunition M.T. Section Quarters section Store etc., The Special R.S.Is A.R.S.Is Hawaldars, and police constables who are also part of the organization assisting the work of deployment, training maintenance functions etc.

**OBJECTIVES**;

1) To Assist Civil Police in maintaining L & O. and Protect life and property of public during natural calamities.

**DUTIES OF OFFICERS [GENERAL]**

The common duties of battalion are as follows:-

A] To control grave and serious law and order situations

B] Various Bando Bust duties

C] Duties in connection with the out break of organized crime or crimes resulting wide Spread panic

D] Duties in connection with students political aggression and lab our agitations

E] Duties in connection with important fairs and festivals

F] Duties in connection with serious natural calamities and accidents

G] Duties in connection with naxalite operations

H] Election Bando Bast duties

I] Promote and preserve public order

**THE ORGANISATIONAL HIERARCHY OF K.S.R.P. IIBN, BELGAUM**






**DUTIES AND RESPONSIBILITIES OF OFFICERS AND MEN ARE AS FOLLOWS**:-

**1] COMMANDANT**

The control and administration of entire battalion is fully vested in the commandant He is responsible for deployment of men for the bando bust duties and also responsible for the administration, training, discipline, financial, fleet management, welfare of the all the officers and men under his control.

**2] ASSISTANT COMMANDANT- I (Adjutant)**

Assistant commandant [adjutant] he is second in command in the battalion and act as staff officer to the commandant in connection with deployment of force for Bando Bust duties, he is holding the charge of company and he is assisting Commandant pertaining to the duties as A.C. H.Q.

**3] ASSISTANT COMMANDANT--II**

Assistant commandant-II is working as Asst commandant of wing. He is responsible for the administration of company, deployment discipline training welfare of the staff of his wing and he also perform the important works that were entrusted by the commandant

**4] ASSISTANT COMMANDANT-III**

One wing of this battalion is stationed at Rayapur for monitoring the law and order situation of Hubli-Dharwad and also in neighboring dists. 2 companies comes under his control, he is responsible for the similar duties of deployment discipline training welfare of the staff of his wing.

**5] SPECIAL R.P.Is - 10 POSTS**

They will hold the charge of respective companies assigned to them they are also responsible for deployment administration, discipline, physical training and welfare of the respective companies.

Spl. RPI QM looks after the Building Section maintenance of Arms, Ammunitions and Kit Articles etc. of the staff. And also welfare of staff.

Further Spl. RPI MT looks after maintenance of Police vehicles their repairs and sanction of fuel, repairs bills and renewals of insurance of Police vehicle etc.

Further Spl. RPI Garrison look after mess and canteen of the Battalion on a No Profit No Loss basis.

**6] R.S.Is— 22 Posts**

Special R.S.Is is in charge of a platoon and he is called as platoon commander. The duties of platoon commander are divided in to two groups viz duties at head quarters and duties on deployment,

**(i ) HQ duties**

Head quarter duties to impart training in drill, turnout, parade, command drill movements discipline, physical training and maintenance of arms and ammunitions, kit inspection and hearing of grievances of staff.

**(ii) DUTIES ON DEPLOYMENT**

The RSI will make arrangements for deployment of men and he ensures that men and officers deployed for bando bast are equipped with arms and ammunitions etc., he will also ensure about the accommodation at destination places, and ration advances etc.. to men under his control.

**COMPANY HAVALDAR MAJOR (A.R.S.Is – 8 Posts)**

He is of the rank of special ARSI he will assist company commander in day to day company administration and also act as platoon commander in the absence of Spl. RSI. He will also communicate important matters affecting efficiency and morale of men of his company.

**BATTALION HAVALDAR MAJOR**

He will assist the Senior Spl. R.P.I. in day to day deployment, he will collect attendance report from company Havaldar of each company and will prepare and send consolidated parade statement to Senior Spl. R.P.I

**PLATOON HAVALDARS – 183 POSTs**

Senior Havaldar of the platoon will be nominated as Platoon Havaldars, he will assist the platoon commander in addition to his duty as section commander. He will also function as platoon Havaldar he will take daily attendance of the platoon personnel and report to the platoon commander. He will assist commander in training, good command and ensure turnout drill movements and maintain standard of discipline in the platoon.

**POLICE CONSTABLES – 715 Posts**

Constables constitutes the core of the platoon and they should be physically fit. They will attend Bando Bast duties where they are being deployed, as a member of striking force, they face tense hard core situations, in spite of that they will guard buildings properties and also attend other duties assigned by commanders. They assist local police in maintenance of L & O in the dist.

**FOLLOWER JAMEDAR – 1 Post**

He will supervise and control over followers in the unit. He will work under the Battalion quarter master. He will be responsible for the attendance, discipline and assigning of duties to the Followers of the unit

(a) Cooks
(b) Water Carriers
(c) Dhobies
(d) Sweepers
(e) Barbers
(f) Cobblers
(g) Tailors
(h) Carpenters

**FOLLOWER – 91 Posts**

Follower means any person appointed to do the work of a cook, mess servant, Washer man, cobbler, barber, tailor, sweeper or an orderly in connection with the State Reserve Police Force.

A follower will perform the duties assigned to him by the Follower Jamedar as per his trade. He will also accompany the platoons sent on out station duty.

**ASSISTANT ADMINISTRATIVE OFFICER**

Shri. I. K. Talwar, Assistant Administrative Officer is the head of the Ministerial staff assisting the commandant K.S.R.P. Belgaum in office administration, he is guiding and supervising the work of ministerial staff working in Establishment Accounts, Stores etc. sections.

**SECTION SUPDT.**

Shri. U.C. Battur, is subordinate to A.A.O and under the guidance of Asst-Administrative Officer he performing the duties of supervision work of subordinates FDAs/SDAs and also deals with (1) Maintenance of Audit Notes of both Chief office and A.G Bangalore & sending of compliance reports etc. (2) Maintenance of long rolls of executive staff of the Battalion.

**F.D.As**

The Office work is divided in to main 2 section 1] Establishment section 2] Accounts section

**F.D.A:** Shri. S.N. Chougale is looking after Establishment section, which is consisting the work of, 1) Recruitment, transfers and deputation 2) Correspondence regarding addl.charge, in charge arrangements, seniority list of PC's HC's, ARSI's RSI's and all ranks including foll and ministerial staff. 3) Sanction of charge allowance 4) sending of recommendation rolls for promotion in respect of all ranks. 5) Sanction of time bond/addl./Spl. Increments to the officers who have completed 10 years/15 years/20 years, including promotional increment under 42 B KCSR's/ Stepping up of pay, Pay fixation etc. 6) Declaration of probation period. 7) Appointment on CG grounds 8) Issue of retirement Orders and their relief (9) Sending of monthly, quarterly, half yearly statement (10) Re-Organization proposals (11) Sending of half yearly statement of cases under rule 285 of KCSR's (12) Opening of SR's in respect of newly recruited PC's and others (13) Issue of service certificates (14) Furnishing parawise remarks on KAT application pertaining to his EST section (15) Review of Promotion.

**F.D.A:** Shri. N.V. Bevinkatti is posted to pay bill section. His duties are (1) Preparation of monthly pay bills and supplementary bills including 30/15 days salary in leave of Gazette Holiday and issue of L.P.C's (2) Correspondence relating to KGID and LIC cases (3) Issue of IT certificates to officers/men and filing of I.T returns. (4) Preparation of Arogya Bhagya Yojane treatment bills (5) Issue of Salary Certificates (6) Sanction of HRA.

**S.D.A:** Shri. A.G. Bhusari is posted to cash section he maintain (1) General cash book B.F and sports cash book correspondence pertaining to these cash books and holding of B.F meetings etc. Monitoring of B.F long rolls. (2) Sending of Monthly Expenditure statements. (3) Correspondence pertaining to Arogya Bhagya Yojane collection of monthly premiums and sending the DD's to ABY trust. (4) Correspondence pertaining to Sale of Police flag, Ex- Police officers fund.

**S.D.A:** Shri. B.S. Ghatage is posted to Deptl. Enquiry section. He mainly deals with (1) D.E's under Rule 6 and 7 (KSP DP) Rules 1965 and amendment rules 1989 and rule 11 and 12 of C., C., A. Rules (2) Monthly, queartely and half yearsly returns of DE section. (3) Correspondence regarding appeals, revision appeals KAT application and WP in HC and supreme court in respect of DE (4) Punishments entries in S.R's.

**S.D.A:** Shri.M.A.Ghatakamble, he mainly deals with (1) Sanction of Personal Pay to the Govt. servants who have undergone tubectumy operations after having 2 children (2) Maintenance of S.R's of officers and other staff and entries nomination etc. (3) Sanction of all kinds of leaves to the officers and ministerial staff (4) Sanction of HTC/LTC/uniform allowance of officers (5) Issue of exemption certificates as per KCS (Kannada Language Exams) Rules 1974 (6) Sanction of Annual increments (7) Sanction of EL Encashment benefits to all staff. (8) Issue of deserter notices to absentees and regularization of absence period.

**S.D.A:** Smt. PM.Talakatnal is entrusted with the work of (1) preparation of monthly T.A bill (2) Preparation of T.A advance Bills and watching recovery and sending cost statement when deployement made out of state (3) Preparation of HTC/LTC bills.

**S.D.A:** M.B. Yallapnavar is posted to pension section, he mainly deals with (1) Preparation and submission of pension papers to AG Bangalore (2) Sending monthly statements of pension (3) Preparation of contingency bills/refund bills (4) Sanction, Preparation of weekly of bills, other remuneration bills (5) Ex-gratia payments and payment of funeral expenses of deceased police persons (6) Preparation and submission of Annual Budget to Chief office.

**S.D.A:** Smt. S.S. Dodamani she looking after Store section (1) Maintenance of stationery, form and issue registers. (2) Sending of annual indent both stationery and police forms to Government printing press (3) local Purchase of stationery and issue of stationery (4) Maintenance of long rolls of ministerial staff.

**S.D.A:** Smt. S.S. Dodamani holding addl. Charge, of inward and outward section (Tappal Section) and maintaining the Stamp account

**S.D.A:** Shri. B.B. Tilaganji, he mainly deals with (1) All correspondence and preparation of GPF Temporary Advance/ Loans, partial and final withdrawal bills. (2) Preparation of EFBF and EGIS/EL Encashment bills (3) Medical reimbursement bills (4) Sanction of pay Advance/Festival Advance and all types of Advances and Maintenance of recovery watch register.

**STENOGRAPHER:** Kumari. Sana.V.Kadoli is working as P.A to Commandant and is maintaining ACRs of all C group employees and also property returns and Preparing dairy of Commandant, maintaining the dairies of Asst. Commandants, RPI''s,. Preparing the meeting compliance reports, Sending monthly report of grievances and attending all other works entrusted by the Commandant.

**TYPIST:** Smt. P.M. Jadhav , she is doing typing/computer work of all section. Since there is vacancy of one typist in this office.

(iii) **THE PROCEDURE FOLLOWED IN THE DECISION MAKING PROCESS INCLUDING CHANNELS OF SUPERVISION AND ACCOUNTABILITY:**

The commandant K.S.R.P. is assisted by the following officers of rank of Assistant Commandants and Spl. R.P.I.'s

| | |
|---|---|
| 1)Assistant commandant | HQ Belgaum |
| 2) Assistant commandant | 2 Belgaum |
| 3) Assistant commandant | Rayapur Detachment |

| | |
|---|---|
| 1) R.P.I | A company |
| 2) R.P.I | B company |
| 3) R.P.I | C company |
| 4) R.P.I | D company |
| 5) R.P.I | E company |
| 6) R.P.I | F company |
| 7) R.P.I | Hq company |
| 8) R.P.I | Garrison |
| 9) R.P.I | M.T.section |
| 10) R.P.I | Quarter Master |

The force of the battalion divided into 7 companies viz HQ A,B,C,D,E, and F Further the A,B,C,D, and HQ Companies are located in Macche Belgaum and E and F companies are functioning at

Rayapur of Dharwad District. Further, Commandant is assisted by an Administrative Officer in HQrs for discharging the duties connected with office Administration.

**(IV)THE NORMS SET BY IT FOR THE DISCHARGE OF ITS FUNCTIONS:**

1) To keep the society peaceful and public satisfied with the security afforded to persons and property.
2) To keep the force under control in good disciplined well-trained efficient always ready position for meeting with the calls of un expected events.
3) To maintain cordial relation with officers and officials of District Police Administration
4) Ensure that the arms and ammunitions stores and buildings belonging to the unit are maintained in good condition.
5) To participate to the extent possible and permissible in welfare activities sponsored by the official and non official agencies.
6) To get to know all the officers and men serving under, and redress the grievances if any encourage those who are performing effectively, deal with those who are guilty of misconduct or remiss in discharge of duty.
7) To ensure the honesty and integrity of the officers and men.

(V) THE RULES, REGULATIONS, INSTRUCTIONS, MANUALS AND RECORDS, HELD BY IT OR UNDER ITS CONTROL OR USED BY ITS EMPLOYEES FOR DISCHARGING ITS FUNCTIONS:

1) K.S.R.P. MANUAL
2) KARNATAKA POLICE ACT
3) K.F.C
4) K.C.S.R.
5) I.P.C.
6) M.C.E
7) OFFICE PROCEDCURE
8) K.C.S. (C.C.A) RULES
9) K.S.P. (DP) RULES
10) SERVICE MANUAL

**(VI) A STATEMENT OF THE CATEGORIES OF DOCUMENTS THAT ARE HELD BY IT OR UNDER ITS CONTROL**

Following records are held by the unit

1) Recruitment of Police constables
2) Routine office records of all sections in the unit

(VII) THE PARTICULARS OF ANY ARRANGEMENT THAT EXISTS FOR CONSULTATION WITH, OR REPRESENTATION BY THE MEMBERS OF PUBLIC IN RELATION TO THE FORMULATION OF ITS POLICY OR ADMINISTRATION THEREOF:

Commandant will furnish necessary information in this regard.

(VIII) A STATEMENT OF THE BOARDS, COUNCILS, COMMITTEES AND OTHER BODIES CONSISTING OF TWO OR MORE PERSONS CONSTITUTED AS ITS PART OR FOR THE PURPOSE OF ITS ADVISE, AND AS TO WHETHER MEETINGS OF THOSE BOARDS, COUNCILS,COMMITTEES AND OTHER BODIES ARE OPEN TO THE PUBLIC, OR THE MINUTES OF SUCH MEETING ARE ACCESSIBLE FOR PUBLIC.

Not applicable

**(IX) A DIRECTORY OF ITS OFFICERS AND EMPLOYEES**:

**Sriyuhs:**

**Asst-Commandants**

| | | Date of holding the charge |
|---|---|---|
| 1) B. Devendrappa | Asst-Commandant-I | 02-01-2006 |
| 2) V.A.Jiral | Asst-Commandant-II | 31-12-2005 |
| 3) S.V.Kurlekar | Asst-Commandant-III | 27-09-2003 |

**Police Inspectors**

| | | |
|---|---|---|
| 1) P.S.Bikshavatimath | R.P.I. | 03-07-2003 |
| 2) G.D. Naik | R.P.I. | 03-06-2004 |
| 3) Chikkaladinni | R.P.I. | 07-06-2006 |
| 4) V.B.Bellad | R.P.I. | 21-05-2007 |
| 5) Y.H.Mulla | R.P.I. | 28-05-2007 |
| 6) V.B. Halijol | R.P.I. | 29-05-2007 |
| 7) I.G.Hiremath | R.P.I. | 01-06-2007 |
| 8) R.A.Chigari | R.P.I. | 04-06-2007 |
| 9) P.D. Varude | R.P.I | 14-08-2009 |
| 10) U.H Bandiwaddar | R.P.I | 10-12-2009 |

**(X)THE MONTHLY REMUNERATION RECEIVED BY EACH OF ITS OFFICERS AND EMPLOYEES, INCLUDING THE SYSTEM OF COMPENSATION AS PROVIDED IN ITS REGULATIONS:**

| Designation | Pay Scales |
|---|---|
| a) Commandant | 18150-26925 |
| b) Asst-Commdts | 14050-25050 |
| c) RPIs | 10800-20025 |
| d) RSIs | 10000-18150 |
| e) ARSIs | 7275-13350 |
| f) HCs | 6250-10000 |
| g) PCs | 5800-10500 |
| h) Foll-Jamadar | 5800-10500 |
| i) Followers | 5200-8200 |
| | |
| 1) A.A.O | 10800-20025 |
| 2) S.S. | 10000-18150 |
| 3) FDA/Stenographer | 7275-13350 |
| 4) SDA | 5800-10500 |
| 5) Dalayat | 4800-7275 |

Pensionery benefits etc are allowed as per rules applicable from time to time.

**(XI) THE BUDGET ALLOCATED TO EACH OF ITS AGENCY, INDICATING THE**

**(XII) PARTICULARS OF ALL PLANS, PROPOSED EXPENDITURES AND REPORTS ON DISBURSEMENTS MADE:**

| SL. NO. | HEAD OF ACCOUNT | BUDGET PROPOSED FOR THE YEAR 2009 10 |
|---|---|---|
| 1) | 2055-00-104-0-01-195<br>Transport Exp. | 72,16,727/- |
| 2) | 2055-00-104-0-01-051<br>General Expenses | 10,22,800/- |
| 3) | 2055-00-104-0-01-071<br>Building Expenses | 10,67,509/- |
| 4) | 2055-00-104-0-01-015<br>Subsidiary Expenses | 4,30,500/- |
| 5) | 2055-00-113-0-01-106<br>Subsidies Free ration | 16,24,000/- |
| 6) | 2055-00-104-0-01-041<br>Traveling Expenses | 61,12,200/- |

**(XII) THE MANNER OF EXECUTION OF SUBSIDY PROGRAMMES, INCLUDING THE AMOUNTS ALLOCATED AND THE DETAILS OF BENEFICIARIES OF SUCH PROGRAMMES**.

Under the head modernization, funds were released in favour of police Housing Corporation for construction of buildings, office building and residential buildings, Chairman and Managing Director, Karnataka State Police Housing Corporation Ltd. Is the authorized unit officer for incurring expenditure under this budgetary head.

**(XIII) PARTICULARS OF RECIPIENTS OF CONCESSIONS, PERMITS OR AUTHORIZATIONS GRANTED BY IT:**

-- Nil --

**(XIV) DETAILS IN RESPECT OF THE INFORMATION, AVAILABLE TO OR HELD BY IT, REDUCED IN AN ELECTRONIC FORM:**

-- Nil --

**(XV) THE PARTICULARS OF FACILITIES AVAILABLE TO CITIZENS FOR OBTAINING INFORMATION, INCLUDING THE WORKING HOURS, A LIBRARY OR READING ROOM, MAINTAINED FOR PUBLIC USE:**

-- Nil --

**(XVI) Public Information Officers and Appellate Authorities in the Police Station/Range I.G.s, under the Right to Information Act**

| SL. No. | Office | Public Information Officer | Assistant Public Information Officer | Appellate Authority |
|---|---|---|---|---|
| 1) | Commandant, IIBN, K.S.R.P. Belgaum | A.A.O. | Section Supdt. | Commandant |

**(XVII ) SUCH OTHER INFORMATION AS MAY BE PRESCRIBED**

**Executive Staff as on 15-12-2009**

| Sl. No. | Rank | Sanctioned strength | Actual | Vacancy |
|---|---|---|---|---|
| 1) | Commandant | 01 | 01 | -- |
| 2) | Asst-Commandant | 03 | 03 | -- |
| 3) | Spl. R.P.I. | 10 | 10 | -- |
| 4) | Spl. R.S.I. | 22 | 21 | 01 |
| 5) | Spl.A.R.S.I. | 08 | 08 | -- |
| 6) | HC | 183 | 183 | -- |
| 7) | PC | 715 | 611 | 104 |
| 8) | Follower Jamadar | 01 | 01 | -- |
| 9) | Follower Cook | 28 | 27 | 01 |
| 10) | Follower Water carrier | 14 | 14 | -- |
| 11) | Follower Dhobi | 14 | 14 | -- |
| 12) | Follower Sweeper | 14 | 14 | -- |
| 13) | Follower Barber | 14 | 14 | -- |
| 14) | Follower Mochi | 02 | 02 | -- |
| 15) | Follower Tailor | 03 | 03 | -- |
| 16) | Follower Carpenter | 02 | 02 | -- |
| | **Total** | **1034** | **928** | **106** |

**Ministerial Staff as on 15-12-2009**

| Sl.No. | Rank | Sanctioned strength | Actual | Vacancy |
|---|---|---|---|---|
| 1. | A.A.O. | 01 | 01 | -- |
| 2. | S.S. | 01 | 01 | -- |
| 3. | F.D.A. | 03 | 02 | 01 |
| 4. | STENO | 01 | 01 | -- |
| 5. | S.D.A. | 07 | 07 | -- |
| 6. | TYPIST | 02 | 01 | 01 |
| 7. | DALAYAT | 02 | 02 | -- |
| | **TOTAL** | **17** | **15** | **02** |

**S.H.NAIK**

PR-191

**Commandant,**

**II Bn K.S.R.P. Belgaum**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.7/2010ಎಫ್, ದಿನಾಂಕ:10ನೇ ಮಾರ್ಚ್, 2010**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ಗ್ಲಾಡ್‌ಸನ್ ಕುಮಾರ್ ಕೋಟ್ಯಾನ್ ತಂದೆ: ಎಡ್ವರ್ಡ್‌ಕೋಟ್ಯಾನ್.<br>2) ನವೀಣ್ ರತ್ನಾಕರ್ ಕೋಟ್ಯಾನ್ ತಂದೆ: ದಿ.ಎಡ್ವರ್ಡ್‌ಕೋಟ್ಯಾನ್.<br>3) ಕುಮಾರಿ ಲವೀನಾ ಎಸ್. ಕೋಟ್ಯಾನ್ ತಂದೆ: ದಿ.ಎಡ್ವರ್ಡ್‌ಕೋಟ್ಯಾನ್. ಬಸವನ ಕಜೆ ಮನೆ, ಬೆಲುವಾಯಿ ಪೋಸ್ಟ್, ಅಲಂಗಾರು, ಮಂಗಳೂರು ತಾಲ್ಲೂಕು. | | 1) ಶ್ರೀಮತಿ ಸಂಧ್ಯಾ ಪಿ. ಶೆಟ್ಟಿ, ಕೋಂ ದಿ. ಪುರುಶೋತ್ತಮ್ ಶೆಟ್ಟಿ ಜೋತಿಲೊಟ್ಟು ಹೌಸ್, ಕಲ್ಲಬೆಟ್ಟು ಪೋಸ್ಟ್, ಮೂಡಬಿದ್ರೆ–574227.<br>2) ನ್ಯಾಷನಲ್ ಇನ್ಶೂರೆನ್ಸ್ ಕಂಪೆನಿ, 1ನೇ ಮಹಡಿ, ನಿತ್ಯಾನಂದ ಕಾಂಪ್ಲೆಕ್ಸ್, ನಿಯರ್ ಬಸ್‌ಸ್ಟ್ಯಾಂಡ್, ಮೂಡಬಿದ್ರೆ–574227. |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಗ್ಲಾಡ್‌ಸನ್ ಕುಮಾರ್ ಕೊಟ್ಯಾನ್ ಇವರು ತಮ್ಮನಾದ ಶ್ರೀ ದಿವಂಗತ ಶ್ರೀ ವಿನಯ ಎಡ್ವರ್ಡ್ ಕೊಟ್ಯಾನ್ ಇವರು 1ನೇ ಪ್ರತಿವಾದಿಗಳಾದ ಶ್ರೀಮತಿ ಸಂಧ್ಯಾ ಪಿ.ಶೆಟ್ಟಿ ಇವರ ಟೆಂಪೋಟ್ರ್ಯಾಕ್ಸ್ ವಾಹನ ನಂಬರ್ ಕೆಎ–19–ಬಿ–4076 ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:18.11.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ– I, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.8/2010ಎಫ್, ದಿನಾಂಕ:10ನೇ ಮಾರ್ಚ್, 2010**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ಲಕ್ಷ್ಮಿ ಗಂಡ: ದಿವಂಗತ ಪರಶುರಾಮ.<br>2) ಪ್ರಮೋದ್, ಪ್ರಾಯ 9 ವರ್ಷ.<br>3) ಪ್ರವೀಣ್, ಪ್ರಾಯ 7 ವರ್ಷ, ಕೆ.ಸಿ.ಡಿ.ಸಿ. ರಸ್ತೆ, ಆಕಾಶವಾಣಿ, ಸಾಯಿಬಾಬ ಮಂದಿರದ ಹತ್ತಿರ, ಕುರ್ಪಾಲಿಕಾಂಪೌಂಡ್, ಧಾರವಾಡ. | | 1) ಮ್ಯಾನೇಜಿಂಗ್ ಡೈರೆಕ್ಟರ್, ಕೆ.ಎಸ್.ಆರ್.ಟಿ.ಸಿ. ಬೆಂಗಳೂರು.<br>2) ಯುನೈಟೆಡ್ ಇನ್ಶೂರೆನ್ಸ್ ಕಂಪೆನಿ ಬಸವನಗುಡಿ, ಬೆಂಗಳೂರು–560004.<br>ಡಿವಿಜನಲ್ ಆಫೀಸ್, ಮೊದಲಿನ ಮಹಡಿ, ರಾಮಭವನ ಕಾಂಪ್ಲೆಕ್ಸ್, ಕೊಡಿಯಾಲ್ ಬೈಲ್, ಮಂಗಳೂರು. |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಲಕ್ಷ್ಮೀ W/o ದಿವಂಗತ ಪರಶು, ಇವರು ತಮ್ಮ ಗಂಡನಾದ ಶ್ರೀ ಮೃತ ಪರಶುರಾಮ ಇವರು 1ನೇ ಪ್ರತಿವಾದಿಗಳಾದ ಕೆ.ಎಸ್.ಆರ್.ಟಿ.ಸಿ. ಬೆಂಗಳೂರು, ಬಸ್ ಸಂಖ್ಯೆ: ಕೆಎ–01–ಎಫ್–8534 ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:27.12.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I, ಮಂಗಳೂರು.

ಪಿ.ಆರ್–385